ಸದನದಲ್ಲಿ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು
ನೂರ ನಲವತ್ತಮೂರನೆಯ ಅಧಿವೇಶನ
ಬುಧವಾರ, ದಿನಾಂಕ : 03 ನೇ ಫೆಬ್ರುವರಿ, 2021

ಕೃಷಿ ಉಪಯೋಗಕ್ಕಾಗಿ "ಸಂಚಾರಿ ಹೆಲ್ತ್ ಕ್ಲಿನಿಕ್" ಸ್ಥಾಪಿಸುವ ಬಗ್ಗೆ

ಶ್ರೀ ಕವಟಗಿಮಠ ಮಹಾಂತೇಶ ಮಲ್ಲಿಕಾರ್ಜುನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ):-

263 (380) ಮಾನ್ಯ ಕೃಷಿ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಕೃಷಿಯಲ್ಲಿ ಕಾಲಕಾಲಕ್ಕೆ ಮಣ್ಣು, ನೀರು ಪರೀಕ್ಷಿಸಲು ಮತ್ತು ಇತರೆ ತಾಂತ್ರಿಕ ನೆರವಿಗಾಗಿ "ಸಂಚಾರಿ ಕೃಷಿ ಹೆಲ್ತ್ ಕ್ಲಿನಿಕ್"ಗಳನ್ನು ಪ್ರಾರಂಭಿಸುವ ಉದ್ದೇಶ ಸರ್ಕಾರಕ್ಕಿದೆಯೇ ;

(ಆ) ಈ ತರಹದ ಕ್ಲಿನಿಕ್‌ಗಳ ಉದ್ದೇಶಕ್ಕಾಗಿ ಮೀಸಲಿಡಲಾದ ಹಣವೆಷ್ಟು;

(ಇ) ಪ್ರಸಕ್ತ ಸಾಲಿನಲ್ಲಿ ಸದರಿ ಉದ್ದೇಶಕ್ಕಾಗಿ ಖರೀದಿಸಲಾದ ಉಪಯುಕ್ತ ವಾಹನಗಳು ಎಷ್ಟು ;

(ಈ) ಈ ಯೋಜನೆಯಡಿಯಲ್ಲಿ ಎಷ್ಟು ಹಳ್ಳಿಗಳಿಗೆ ಭೇಟಿ ನೀಡಿ ರೈತರಿಗೆ ಸಹಾಯ ಮಾಡಲಾಗಿದೆ ? (ಜಿಲ್ಲಾವಾರು ಮಾಹಿತಿ ನೀಡುವುದು)